# ಮುಂಜಾವು
ವಾರಪತ್ರಿಕೆ.
ಸಂಪಾದಕ: ಸಿರಿಮನೆ ನಾಗರಾಜ್

ರಿಜಿಸ್ಟರ್ಡ್ ನಂ. ಕೆಆರ್‌ಎನ್‌ಎಸ್ — ೧೯

೨ನೇ ವರ್ಷ ಸಂಚಿಕೆ ೩ ಕೊಪ್ಪ ೪-೯-೮೩ ಭಾನುವಾರ ಬೆಲೆ ೪೦ ಪೈಸೆ

## ಹಣದಾಸೆಗೆ ನಾಲ್ವರ ಭೀಕರ ಕೊಲೆ; ಹಣ ವಶ, ಆರೋಪಿಗಳ ಬಂಧನ

**ತೀರ್ಥಹಳ್ಳಿ: ಆನಂದಪುರಂನ "ರೈತಬಂಧು" ಗ್ರಾಮೋದ್ಯೋಗ ಸಂಸ್ಥೆಯ ಇಬ್ಬರು ಲಾರಿ ಚಾಲಕರು ಮತ್ತು ಇಬ್ಬರು ಸೇಲ್ಸ್‌ಮನ್‌ಗಳನ್ನು ಅಮಾನುಷ ರೀತಿಯಲ್ಲಿ ಕೊಲೆಮಾಡಿ, ೧ ಲಕ್ಷ ೧೫ ಸಾವಿರ ರೂ. ಅಪಹರಿಸಿದ್ದ ಸಾಗರದ ಮಹಮ್ಮದ್ ಮತ್ತು ಚಂದ್ರಶೇಖರ ಎಂಬಿಬ್ಬರನ್ನು ಕದ್ದ ಹಣದ ಸಮೇತ ಬಂಧಿಸುವಲ್ಲಿ ಶಿವಮೊಗ್ಗ ಜಿಲ್ಲಾ ಪೋಲೀಸ್ ಪಡೆ ಯಶಸ್ವಿಯಾಗಿದೆ.**

ಆಗಸ್ಟ್ ೨೮ರ ಬೆಳಗಿನಜಾವ ಆರಗ ಮತ್ತು ಆನಂದಪುರಂ ನಡುವೆ ಈ ಕೊಲೆಗಳು ನಡೆದಿದ್ದು, ಕೇವಲ ಮೂರು ದಿನದ ಕಾರ್ಯಾಚರಣೆಯಲ್ಲಿ ಆರೋಪಿಗಳಾದ ಸಾಗರದ ಮಹಮ್ಮದ್ ಮತ್ತು ಚಂದ್ರಶೇಖರ ಇಬ್ಬರೂ ಸಿಕ್ಕಿಬಿದ್ದಿದ್ದಾರೆ. ಹಿಂದೆ ಗ್ರಾಮೋದ್ಯೋಗದಲ್ಲಿ ಡ್ರೈವರ್‌ಗಳಾಗಿದ್ದು ಅಲ್ಲಿಂದ ಬಿಟ್ಟು ಈ ಇಬ್ಬರೂ ಒಟ್ಟಾಗಿ 'ಜುಬೇದ' ಎಂಬ ಲಾರಿ ಖರೀದಿಸಿ, ಒಂದು ಲಕ್ಷ ರೂ. ಬಾಕಿ ಉಳಿಸಿಕೊಂಡಿದ್ದರೆನ್ನಲಾಗಿದೆ. ದೋಚಿದ ಹಣದಲ್ಲಿ ಕೇವಲ ೪೪೫ ರೂ. ಮಾತ್ರ ಅವರು ಬಳಸಿಕೊಂಡಿದ್ದರು.

ಕೊಲೆಗೀಡಾದವರು ಚಾಲಕರಾದ ಮಂಜುನಾಥ, ವಿಶ್ವನಾಥ ರೈ ಹಾಗೂ ಸೇಲ್ಸ್‌ಮನ್‌ಗಳಾದ ಲೋಕೇಶ್ ಮತ್ತು ಶಿವಪ್ಪ. ಎಲ್ಲರೂ ಸುಮಾರು ೨೫ರ ಅವಿವಾಹಿತ ತರುಣರು.

ಸೆ. ೧ ರಂದು ಈ ಪತ್ರಕರ್ತ ತೀರ್ಥಹಳ್ಳಿ ಠಾಣೆಗೆ ಹೋದಾಗ ಆರೋಪಿಗಳು ಒಳಗೆ ಬೆಳಗಿನ ತಿಂಡಿ ತಿನ್ನುತ್ತ ನಿರ್ಲಿಪ್ತರಾಗಿ ಕೂತಿದ್ದರು. ಹೊರಗಡೆ ಗುಂಪು ಸೇರಿದ್ದ ೧೦೦-೧೫೦ ಜನ "ಅವರನ್ನು ಮೆರವಣಿಗೆ ಮಾಡಿ", "ಹೊರಗೆ ತಂದು ಎಲ್ಲರಿಗೂ ಕಾಣುವಂತೆ ಕಟ್ಟಿ ಹಾಕಿ", "ನೇತು ಹಾಕಿ" ಮುಂತಾಗಿ ಬೊಬ್ಬೆ ಹಾಕುತ್ತಿದ್ದರು. ಆರೋಪಿಗಳುನ್ನು ಹಿಡಿದು ತರುತ್ತಿದ್ದಾಗ ಅವರನ್ನು ನೋಡಿ ಯಾರೋ ನಗಾಡಿದಕ್ಕೆ "ಯಾಕ್ರೋ ನಗ್ತೀರಿ? ಕೊಲೆಯಾದವರು ಸತ್ತಿದ್ದಾರೆ. ಕೊಂದವರು ನಾವಿದ್ದೇವೆ. ನೀವೆಂತ ನಗೂದು?" ಎಂದು ಉಡಾಫೆ ಮಾತನಾಡಿದರಂತೆ ಎಂಬ "ಅಂತೆ"ಯೇ ಜನರ ಈ ಆಕ್ರೋಶಕ್ಕೆ ಮುಖ್ಯ ಕಾರಣವೆಂದು ತಿಳಿದುಬಂತು. (ಆರೋಪಿಗಳ 'ಸಾಹಸ'ದ ವಿವರ ಮುಂದಿನ ಸಂಚಿಕೆಯಲ್ಲಿ.) §‡

### ಬಾಳೆಹೊನ್ನೂರು ಪ್ರಕರಣಗಳು: ಆಪಾದಿತರ ಶರಣು

ಬಾಳೆಹೊನ್ನೂರು: ಇಲ್ಲಿ ಈಚೆಗೆ ನಡೆದ ಸಾಗುವಾನಿ ಮರದ ಕಳ್ಳ ಸಾಗಾಣಿಕೆಯ ಸಂಬಂಧದ ತನಿಖೆ ಮುಕ್ತಾಯ ಹಂತದಲ್ಲಿದ್ದು, ಕಾಫಿ ಬೆಳೆಗಾರ ಮತ್ತು ನಾಟಾ ಕಂಟ್ರಾಕ್ಟರ್ ಬಾಪ್ಟಿಸ್ಟ್ ಪಿಂಟೊ, ಆತನ ತಮ್ಮ ತಿಮೋತಿ ಮತ್ತು ೩ ಜನ ಚಿಕ್ಕಮಗಳೂರಿನ ಸೆಶನ್ಸ್ ಕೋರ್ಟಿಗೆ ಶರಣಾಗಿ ನಿರೀಕ್ಷಣಾ ಜಾಮೀನು ಪಡೆದಿದ್ದಾರೆಂದು ತಿಳಿದುಬಂದಿದೆ.

ಹಾಗೆಯೇ, ಈ ಸಂಬಂಧ ಬಾಳೆಹೊನ್ನೂರಿನಲ್ಲಿ ನಡೆದ ಗಲಭೆಯ ಸಂಬಂಧದಲ್ಲೂ ಬ್ಯಾಪ್ಟಿಸ್ಟ್ ಪಿಂಟೋ ನ. ರಾ. ಪುರ ಕೋರ್ಟಿಗೆ ಶರಣಾಗಿ ಜಾಮೀನು ಪಡೆದು ಬಿಡುಗಡೆಯಾಗಿದ್ದಾರೆಂದು ಗೊತ್ತಾಗಿದೆ.

ಕೊಪ್ಪದ ಸರ್ಕಲ್ ಇನ್‌ಸ್ಪೆಕ್ಟರ್ ಪಿ. ಸಿ. ಗಣಪತಿ ತನಿಖೆ ಮುಂದುವರಿಸಿದ್ದಾರೆ.

### ಹಲ್ಲೆ: ಧೋಬಿ ಚಂದ್ರು ಆಸ್ಪತ್ರೆಗೆ ದಾಖಲು

ಕೊಪ್ಪ: ಶಿವಮೊಗ್ಗದಿಂದ ಬಸ್ಸಿನಲ್ಲಿ ಬರುವಾಗ ಕಾಲು ತಾಗಿತು ಎಂಬ ಕಾರಣಕ್ಕೆ ಮಾತಿಗೆ ಮಾತು ಬೆಳೆದು ನಡೆದ ಹೊಡೆದಾಟ, ಹಲ್ಲೆಗಳ ಪರಿಣಾಮವಾಗಿ ಇಲ್ಲಿ ಧೋಬಿ ವೃತ್ತಿಯ ಚಂದ್ರು ಎಂಬವರಿಗೆ ತೀವ್ರ ಪೆಟ್ಟು ಬಿದ್ದು ಅವರನ್ನು ಶಿವಮೊಗ್ಗದ ಆಸ್ಪತ್ರೆಗೆ ದಾಖಲು ಮಾಡಲಾಗಿದೆ. ಈ ಸಂಬಂಧದಲ್ಲಿ ಇಲ್ಲಿನ ವ್ಯಾಪಾರಿ ದೇವಸಿ ಅವರ ಮಕ್ಕಳು ಮತ್ತು ಇತರ ಕೆಲವರನ್ನ ಬಂಧಿಸಲಾಗಿದೆ.



### ಸನ್ಮಾನ ಸಮಾರಂಭ

ಕೊಪ್ಪ ಸ್ಥಳೀಯ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ವಿಧ್ಯಾರ್ಥಿಗಳು ಸೆ. ೧ ರಂದು, ಇಲ್ಲಿ ಕಿರಿಯ ಕಾಲೇಜಿನ ಮಾಜಿ ಪ್ರಾಂಶುಪಾಲರಾದ ಕೆ.ಎಸ್. ನಾರಾಯಣ ಸ್ವಾಮಿ ಮತ್ತು ಅವರ ಪತ್ನಿ ಹಾಗೂ ಕಳೆದ ವರ್ಷ ತಮ್ಮ ಕಾಲೇಜಿನ ಸಂಸ್ಕೃತ ವಿದ್ಯಾರ್ಥಿಗಳಿಗೆ ಉದಾರ ಮನಸ್ಸಿನಿಂದ ಉಪನ್ಯಾಸ ನೀಡಿ ನೆರವಾದ ಕಿರಿಯ ಕಾಲೇಜು ಸಂಸ್ಕೃತ ಉಪನ್ಯಾಸಕ ಬಿ.ಪಿ. ನಾಯಕ್ ಅವರುಗಳನ್ನು ಸನ್ಮಾನಿಸಿದರು.

ಕಿರಿಯ ಕಾಲೇಜಿನ ನೂತನ ಪ್ರಾಂಶುಪಾಲರಾದ ಜಿ. ವಿ. ಕಿರಗಿ ಯವರ ಅಧ್ಯಕ್ಷತೆಯಲ್ಲಿ ನಡೆದ ಈ ಸಮಾರಂಭದಲ್ಲಿ ಶಾ|| ಅ ಮಂಡಳಿಯ ಮಾಜಿ ಅಧ್ಯಕ್ಷ ಬಿ. ಜಿ. ಚಿದಂಬರ್, ಪ್ರ|| ದ|| ಕಾಲೇಜ ಪ್ರಾಂಶುಪಾಲರಾದ ಕೆ. ವಿ. ಲಿಂಗಪ್ಪ ಮತ್ತು ವಿದ್ಯಾರ್ಥಿಗಳು ಸನ್ಮಾನಿತರ ಸೇವೆಯನ್ನು ಕೊಂಡಾಡಿದರು.

ಉಪನ್ಯಾಸಕರಾದ ಕೆ. ಪಿ. ವೆಂಕಟೇಶ್ ಸ್ವಾಗತಿಸಿ, ಎಸ್. ಎಂ. ರವೀಂದ್ರ ವಂದಿಸಿದರು.

### ಉದ್ಯೋಗ ವಾರ್ತೆ

ಸ್ಟೇಟ್ ಬ್ಯಾಂಕ್ ಗುಂಪಿನ ಕೇಂದ್ರೀಯ ನೇಮಕಾತಿ ಮಂಡಳಿ ಪ್ರೊಬೇಷನರಿ ಅಧಿಕಾರಿಗಳ ಸುಮಾರು ೫೦೦ ಹುದ್ದೆಗಳಿಗಾಗಿ ಪದವೀಧರರಿಂದ ಅರ್ಜಿ ಕರೆದಿದೆ. ವಯೋಮಿತಿ ೨೧ ರಿಂದ ೨೮ ವರ್ಷಗಳು. ಲಿಖಿತ ಪರೀಕ್ಷೆಯ ದಿನಾಂಕ ೧೧-೧೨-೧೯೮೩. ಪರೀಕ್ಷಾ ಶುಲ್ಕ: ಪ. ಜಾತಿ/ ವರ್ಗಗಳವರಿಗೆ ೧೦ ರೂ., ಇತರರಿಗೆ ೪೦ ರೂ. ಅರ್ಜಿಸಲ್ಲಿಸಲು ಕೊನೆಯ ದಿನ ೧೦-೧೦-೮೩. ಅರ್ಜಿ ನಮೂನೆ ಮತ್ತಿತರ ವಿವರಗಳಿಗೆ ೨-೯-೮೩ರ ದಿನಪತ್ರಿಕೆಗಳನ್ನು ನೋಡಿ.

### ಜಲಾಂತರ್ಗಾಮಿ ನೌಕಾದಳಕ್ಕೆ ಅರ್ಜಿ ಆಹ್ವಾನ

ಚಿಕ್ಕಮಗಳೂರು: ನೌಕಾದಳ [illegible] ಅಭ್ಯರ್ಥಿಗಳನ್ನು ನೇಮಕ ಮಾಡಿಕೊಳ್ಳಲು ತಾಂತ್ರಿಕ ವಿದ್ಯಾರ್ಹತೆ ಪಡೆದ ಅರ್ಹ ಅಭ್ಯರ್ಥಿಗಳಿಂದ ಅರ್ಜಿಯನ್ನು ಕರೆಯಲಾಗಿದ್ದು ಇಷ್ಟವುಳ್ಳ ಅಭ್ಯರ್ಥಿಗಳು ನೇಮಕಾತಿ ಅಧಿಕಾರಿ, ೪೬, ರೆಸಿಡೆನ್ಸಿ ರಸ್ತೆ, ಬೆಂಗಳೂರು ಇವರಿಂದ ನಿಗದಿತ ಅರ್ಜಿ ಫಾರಂನ್ನು ಪಡೆದು ಭರ್ತಿಮಾಡಿದ ಅರ್ಜಿಯನ್ನು ಸೆ. ೧೨ ರೊಳಗಾಗಿ ಸಲ್ಲಿಸಲು ಕೋರಲಾಗಿದೆ.

## ಬಾಳಗಡಿಯಲ್ಲಿ ಸಣ್ಣ ಜಾಗಕ್ಕೆ ದೊಡ್ಡ ಜಗಳ: ತಹಸೀಲ್ದಾರ್ ಕ್ರಮಕ್ಕೆ ನಿವಾಸಿಗಳ ವಿರೋಧ

**ಕೊಪ್ಪ: ಬಾಳಗಡಿಯ ಕಾಚಕಲ್ ರಸ್ತೆ ಪಕ್ಕದಲ್ಲಿನ ನಿವಾಸಿಗಳು ೧೫ ವರ್ಷದಿಂದ ಖುಲ್ಲಾ ಇಡಿಸಿಕೊಂಡು ಬಂದಿದ್ದ ತುಂಡು ಭೂಮಿಯೊಂದನ್ನು ತಹಸೀಲ್ದಾರರು ಮೊಹಮದ್ ಹಯಾತ್ ಎಂಬವರಿಗೆ ಈಚೆಗೆ ಮಂಜೂರು ಮಾಡಿರುವುದನ್ನು ನಿವಾಸಿಗಳು ತೀವ್ರವಾಗಿ ಪ್ರತಿಭಟಿಸಿದ್ದಾರೆ.**

"ಒಂದು- ಒಂದೂವರೆ ಗುಂಟೆಯಾಗಬಹುದಾದಷ್ಟಿರುವ ಈ ತುಂಡು ಜಾಗ ದೊಡ್ಡದೊಂದು ಅಂಗಳದಂತಿದ್ದು, ಯಾವಾಗಲೂ ಮನೆಯ ಬಳಿಯೇ ಆಡಿಕೊಂಡಿರಬೇಕಾದ ಚಿಕ್ಕಮಕ್ಕಳು ಮತ್ತು ಹೆಣ್ಣು ಮಕ್ಕಳಿಗೆ ಸಂಜೆಯ ಹೊತ್ತು ಆಡಿ ನಲಿಯಲು ತುಂಬ ಅಚ್ಚುಕಟ್ಟಾಗಿದೆ. ಈ ಆಜುಬಾಜಿನಲ್ಲಿ ಇನ್ನೆಲ್ಲೂ ಇಂಥ ಬಯಲು ಜಾಗ ಇಲ್ಲ. ಚಿಕ್ಕಮಕ್ಕಳನ್ನು ಸಂಜೆಯ ಹೊತ್ತು (ಕತ್ತಲಾಗುವವರೆಗೂ) ಆಡದಂತೆ ನಿರ್ಬಂಧಿಸಲು ಆಗುವುದಿಲ್ಲ. ಆದ್ದರಿಂದ ಈ ತುಂಡು ಜಾಗವನ್ನು ಯಾರಿಗೂ ಮಂಜೂರು ಮಾಡಬಾರದು" ಎಂಬುದು ಅಂದಿನಿಂದ ಇಂದಿನ ವರೆಗೂ ನಿವಾಸಿಗಳ ಕೋರಿಕೆ.

ಆದರೆ ಈ ಜಾಗದ ಪಕ್ಕದಲ್ಲಿ ತಾ. ಅ. ಮಂಡಳಿ ಸುಮಾರು ೧೭ ವರ್ಷದ ಹಿಂದೆ ಕಟ್ಟಿಸಿರುವ ಅಚ್ಚುಕಟ್ಟಾದ ಬಾವಿಯೂ ಸೇರಿದಂತೆ ಸುಮಾರು ೨ ಗುಂಟೆ ಜಾಗವನ್ನು ಸೇರಿಸಿಕೊಂಡು ೧೯೬೮ ರಲ್ಲಿ ಹಾಗೂ ಬಾವಿಯನ್ನು ಮಾತ್ರ ಬಿಟ್ಟು ೧೯೮೦ ರಲ್ಲಿ ಸದರಿ ವ್ಯಕ್ತಿ ಬೇಲಿ ಹಾಕಿಕೊಂಡಾಗ ಸುತ್ತಮುತ್ತಲ ನಿವಾಸಿಗಳು ಪ್ರತಿಭಟಿಸಿ, ಆಗಿನ ತಹಸೀಲ್ದಾರರು ಅದನ್ನು ಖುಲ್ಲಾ ಮಾಡಿಸಿದ್ದರು.

ಇಷ್ಟು ಹಿಂದಿನಿಂದಲೂ ಸಾರ್ವಜನಿಕರ ವಿರೋಧವಿದ್ದಾಗ ಈ ಜಾಗ ಮಂಜೂರು ಮಾಡಿದ್ದರ ಔಚಿತ್ಯವನ್ನು ಪ್ರಶ್ನಿಸಿದಾಗ ತಹಸೀಲ್ದಾರ್ ಹೇಳುವುದು—"ಹಯಾತ್ ಈ ಜಾಗವನ್ನೂ ಸೇರಿಸಿ ಸುಮಾರು ೧೯೬೩ರಷ್ಟು ಹಿಂದೆಯೇ ಸಲ್ಲಿಸಿದ್ದ ದರ್ಖಾಸ್ತು ಅರ್ಜಿಯನ್ನೇ ಈಗ ಮಂಜೂರು ಮಾಡಿರುವುದು. ಅದರಲ್ಲಿ ಆಜುಬಾಜಿನವರ ತಕರಾರಿಲ್ಲ. ಅನಂತರ ತಕರಾರು ಮಾಡಿದ್ದು ಹಿಂದಿನ ತಹಸೀಲ್ದಾರರುಗಳಿಗೆ ಸರಿ ಕಂಡಿರಬಹುದಾದರೂ ನನಗೇನೂ ಅದು ಅಷ್ಟು ಸಕಾರಣವೆನ್ನಿಸುವುದಿಲ್ಲ. ಸಾರ್ವಜನಿಕರ ವಿರೋಧಕ್ಕೆ ಎಲ್ಲ ಸಂದರ್ಭದಲ್ಲೂ ಮಾನ್ಯತೆ ಕೊಡಲೇಬೇಕೆಂದೇನೂ ಇಲ್ಲ. ನಾನು ಮಂಜೂರು ಮಾಡಿದ್ದನ್ನು ನಾನೇ ರದ್ದು ಮಾಡಲೂ ಬರುವುದಿಲ್ಲ. ನನ್ನ ಕ್ರಮ ತಪ್ಪೆಂದು ಅನ್ನಿಸಿದರೆ ಸಾರ್ವಜನಿಕರು ಮೇಲಧಿಕಾರಿಗಳಲ್ಲಿ ತಕರಾರು ಸಲ್ಲಿಸಬಹುದು".

ಆದರೆ, ಒಂದು ಕೇರಿಯಲ್ಲಿ ಚಿಕ್ಕ ಮಕ್ಕಳಿಗೆ ಆಡಿಕೊಳ್ಳಲು ಒಂದು ಸಣ್ಣ ಜಾಗವಾದರೂ ಸಾರ್ವಜನಿಕವಾಗಿ ಮೀಸಲಿರಲಿ ಎಂದು ನಿರೀಕ್ಷಿಸುವುದು ಸಕಾರಣ ಮತ್ತು ನ್ಯಾಯವಲ್ಲವೆ? ಅಲ್ಲದೆ, ೧೯೬೩ ರಲ್ಲಿ ದರ್ಖಾಸ್ತಿಗೆ ಆಜುಬಾಜಿನವರು ಒಪ್ಪಿಗೆ ಕೊಟ್ಟಿದ್ದರೂ ಅನಂತರ ಇಷ್ಟು ವರ್ಷವೂ ಅದಕ್ಕೆ ತಕರಾರು ಬಿದ್ದಿರುವಾಗ, ಇಷ್ಟು ತೀವ್ರವಾದ ಸಾರ್ವಜನಿಕ ವಿರೋಧವನ್ನು ಹಾಗೆಲ್ಲ ಕಡೆಗಣಿಸುವುದು ಉಚಿತವೂ ಅಲ್ಲ. ಸಾಮಾನ್ಯವಾಗಿ ಹಾಗೆ ಕಡೆಗಣಿಸುವುದೂ ಇಲ್ಲ—ಅಲ್ಲವೆ? ಎಂಬ ಪ್ರಶ್ನೆಗೆ ಅವರೆನ್ನುವುದು—"ನನಗೆ ಸರಿ ಕಂಡಿದ್ದನ್ನು ಮಾಡಿದ್ದೇನೆ. ಇದರಿಂದ ಅನ್ಯಾಯವಾಯಿತೆನ್ನಿಸಿದವರು ಸೂಕ್ತ ರೀತಿಯಲ್ಲಿ ನ್ಯಾಯ ಪಡೆದುಕೊಳ್ಳಲು ಅಡ್ಡಿ ಇಲ್ಲ." ([illegible])

ಚಿಕ್ಕಮಗಳೂರು: ವಿಶೇಷ ಘಟಕ ಯೋಜನೆಯನ್ವಯ ಕೊಪ್ಪ ತಾಲೂಕಿನ [illegible] ಜನ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡ ಸದಸ್ಯರಿಗೆ ಸಹಕಾರ ಸಂಘಗಳಲ್ಲಿ ಸೇರುದಾರರಾಗಲು [illegible] ರೂ. ಗಳನ್ನು ಸಹಾಯಧನವಾಗಿ ಇತ್ತೀಚೆಗೆ ಸಹಕಾರ ಸಂಘಗಳ ಉಪನಿಬಂಧಕರು ಬಿಡುಗಡೆ ಮಾಡಿದ್ದು ಇದರ ಉಪಯೋಗವನ್ನು ಪಡೆದುಕೊಳ್ಳಲು ಕೋರಿದ್ದಾರೆ.

# ಯಾರಿಗಾಗಿ ಈ ಯೋಜನೆ?

ಮಾನ್ಯರೆ,

ಸರ್ಕಾರ ಬೇಡದ ಯೋಜನೆಗಳಿಗೆ ಹೇಗೆ ಅನಗತ್ಯವಾಗಿ ಹಣ ಚೆಲ್ಲುತ್ತಿದೆ ಎನ್ನುವುದಕ್ಕೆ ನೆಮ್ಮಾರಿನಲ್ಲಿ ಈಗ ಆರಂಭವಾಗಿರುವ ನೀರು ಸರಬರಾಜು ಯೋಜನೆ ಪ್ರತ್ಯಕ್ಷ ನಿದರ್ಶನ. ಲಕ್ಷಾಂತರ ರೂ. ಗಳ ವೆಚ್ಚದಲ್ಲಿ ಈ ಯೋಜನೆ ಆರಂಭಿಸಿರುವುದು ಯಾರಿಗಾಗಿ ಹಾಗೂ ಏತಕ್ಕಾಗಿ ಎಂದು ಇದನ್ನು ಸರಿಯಾಗಿ ವಿಮರ್ಶಿಸಿದರೆ ಎಂತಹವನಿಗಾದರೂ ಅರಿವಾದೀತು. ಕಾರಣ ಈ ಯೋಜನೆಯಿಂದ ಅನುಕೂಲವಾಗುವುದು ನೆಮ್ಮಾರು ಮಕ್ಕಿ ಎಂಬಲ್ಲಿಯ ಹೆಚ್ಚೆಂದರೆ ೧೦–೧೫ ಮನೆಗಳಿಗೆ ಮಾತ್ರ. ಅಲ್ಲಿಯೂ ಸಹ ಸಾಮಾನ್ಯವಾಗಿ ಎಲ್ಲರ ಮನೆಗೂ ತೆರೆದ ಬಾವಿ ಇಲ್ಲವೇ ಬೋರ್‌ವೆಲ್‌ನ ಅನುಕೂಲವಿದ್ದೇ ಇದೆ. ಇಷ್ಟೇ ಸಾಲದೆಂಬಂತೆ ಹತ್ತಿರದಲ್ಲಿಯೇ ನದಿಯೂ ಇದೆ. ಹೀಗಿರುವಾಗ ಇಲ್ಲಿಗೆ ನೀರು ಸರಬರಾಜು ವ್ಯವಸ್ಥೆ ಇಲ್ಲ ಎಂದು ಯಾರು ಅಳುತ್ತಿದ್ದರೋ ದೇವರೇ ಬಲ್ಲ.

ಇನ್ನು ಈ ನೀರು ಸರಬರಾಜು ವ್ಯವಸ್ಥೆಯ ಮೇಲ್ವಿಚಾರಣೆಗೆ ಒಬ್ಬ ಕೆಲಸಗಾರ ಬೇಕೇ ಬೇಕು. ಅವನಿಗೆ ಕೊಡುವ ಸಂಬಳದ ಹಣವೂ ಇದರಿಂದ ಬರಲಿಕ್ಕಿಲ್ಲ ಎಂದಾಗ ಈ ಯೋಜನೆ ಎಷ್ಟು ನಿಷ್ಪ್ರಯೋಜಕವಾದುದು ಎಂದು ಯಾರಾದರೂ ತಿಳಿಯಬಹುದು.

ನೆಮ್ಮಾರಿನಲ್ಲಿ ಇದಕ್ಕಿಂತಲೂ ಅತ್ಯಗತ್ಯವಾದ ಹಾಗೂ ಆಗಲೇಬೇಕಾದ ಅನೇಕ ಕಾರ್ಯಗಳಿವೆ. ಇಲ್ಲಿಗೆ ಒಂದು ಆಸ್ಪತ್ರೆ, ಪಶುವೈದ್ಯಶಾಲೆ ಅಗತ್ಯ ಬೇಕು. ಈ ನಿಷ್ಪ್ರಯೋಜಕ ಹಣದಿಂದ, ಇದು ಯಾವುದಾದರೊಂದನ್ನು ಕಟ್ಟಿಸಿದ್ದರೆ, ಅದರಿಂದ ನೆಮ್ಮಾರು ಮಕ್ಕಿಯ ಜನರಿಗಷ್ಟೇ ಅಲ್ಲದೆ ಸುತ್ತಮುತ್ತಲ ಅನೇಕ ಗ್ರಾಮಗಳ ಸಾವಿರಾರು ಜನರಿಗೆ ಅನುಕೂಲವಾಗುತ್ತಿತ್ತು. ಹಾಗೂ ಸರ್ಕಾರದ ಹಣವೂ ಒಳ್ಳೆಯ ಕಾರ್ಯಕ್ಕೆ ವಿನಿಯೋಗವಾದಂತಾಗುತ್ತಿತ್ತು.

—'ಸಮದರ್ಶಿ', ನೆಮ್ಮಾರು.

## ಬೇರೆಯವರ ಭೂಮಿಗೆ ಅಕ್ರಮವಾಗಿ ಹಾಕಿದ್ದ ಬೇಲಿ ಅಧಿಕಾರಿಗಳ ಆಶ್ರಯದಲ್ಲಿ ಖುಲ್ಲಾ

ಬೆಲಗದ್ದೆ: ಸಮೀಪದ ಕರುವಾನಿಯ ಗೋಪಾಲಗೌಡ ಎಂಬವರು ತಮ್ಮ ಸ॥ ನಂ ೧೫೦/೧ ರ ಭೂಮಿಯಲ್ಲಿ ಸುಮಾರು ೧೦ ಗುಂಟೆ ಜಾಗಕ್ಕೆ ತಲಗೋಡುಮಕ್ಕಿಯ ದೇಕಣ್ಣಗೌಡ, ಹಾಲಪ್ಪಗೌಡ, ಮತ್ತು ಅವರ ಕೆಲಸದವರಾದ ಸುರೇಶ್ ಮತ್ತು ಬೊಮ್ಮಯ್ಯ ಇವರುಗಳು ಅಕ್ರಮವಾಗಿ ಬೇಲಿ ಹಾಕಿ ಜಗಳ ತೆಗೆದಿದ್ದಾರೆಂದು ಕೊಪ್ಪದ ತಹಸೀಲ್ದಾರರಿಗೆ ಆ. ೧೭ ರಂದು ಅರ್ಜಿ ಕೊಟ್ಟಿದ್ದು, ಆ. ೨೯ ರಂದು ಪೋಲೀಸ್ ದಫೇದಾರ್ ಮತ್ತು ತಾ॥ ಸರ್ವೇಯರ್ ಅವರುಗಳು ಸ್ಥಳಕ್ಕೆ ಭೇಟಿಕೊಟ್ಟು ಸರ್ವೆ ಮೂಲಕ ವ್ಯಾಜ್ಯ ಬಗೆಹರಿಸಿಕೊಳ್ಳಲು ಆದೇಶಿಸಿದರೆಂದೂ, ಸರ್ವೆ ಮಾಡಿದಾಗ ಬೇಲಿ ಹಾಕಿದ್ದು ಅತಿಕ್ರಮವೆಂದು ಸಾಬೀತಾಗಿ ಅದನ್ನು ಖುಲ್ಲಾ ಮಾಡಿಸಲಾಯಿತೆಂದೂ ತಿಳಿದುಬಂದಿದೆ.

## ಅವಿರೋಧ ಆಯ್ಕೆ

ಕೊಪ್ಪ: ಇಲ್ಲಿನ ವ್ಯವಸಾಯ ಸೇವಾ ಸಹಕಾರ ಸಂಘದ ವಾರ್ಷಿಕ ಮಹಾ ಸಭೆ ಜಿ. ಎಸ್. ಶ್ರೀನಿವಾಸರ ಅಧ್ಯಕ್ಷತೆಯಲ್ಲಿ ಆ. ೩೧ ರಂದು ನಡೆದು, ೧೯೮೩–೮೪ಕ್ಕೆ ಈ ಕೆಳಕಂಡವರು ನಿರ್ದೇಶಕರಾಗಿ ಸರ್ವಾನುಮತದಿಂದ ಆಯ್ಕೆಯಾಗಿದ್ದಾರೆ: ಬಿ. ಆರ್. ಪರಮೇಶ್ವರ, ಬಿ. ವೆಂಕಟೇಶಯ್ಯ, ಕೆ. ದಾಮೋದರ ರಾವ್, ಕೆ. ಎಸ್. ಧರ್ಮೇಗೌಡ, ಕುಟ್ಟಿಶೆಟ್ಟಿ, ಜಿ. ಎಸ್. ಶ್ರೀನಿವಾಸ್, ಎಚ್. ಆರ್. ಮಂಜುನಾಥ್, ಬಿ. ಸೀನಪ್ಪ ಮತ್ತು ಕೆಂಚಪ್ಪ.

ನೀರಾವರಿ ಬಾವಿ, ಪಂಪ್‌ಸೆಟ್, ಕೊಳವೆ ಬಾವಿಗಳಿಗೆ, ಹಸು–ಎಮ್ಮೆಗಳಿಗೆ ಹಾಗೂ ಸಣ್ಣ ನೀರಾವರಿ ಪ್ಲಾಂಟೇಶನ್, ತೋಟಗಾರಿಕೆ ಮತ್ತಿತರ ಯೋಜನೆಗಳಿಗೆ ೯ರಿಂದ ೧೫ ವರ್ಷ ಅವಧಿಯ ಸಾಲಗಳನ್ನು ಕೊಡುವ ಬಗ್ಗೆ ತೀರ್ಮಾನಿಸಲಾಯಿತು.

ರಾಮಭಟ್ ಸ್ವಾಗತಿಸಿ, ಬಿ. ಆರ್. ಪರಮೇಶ್ವರ ವಂದಿಸಿದರು.

## ನೌಕರರ ಬಳಕೆದಾರರ ಸಹಕಾರ ಸಂಘದ ವಾರ್ಷಿಕ ಮಹಾಸಭೆ

ಕೊಪ್ಪ: ಮೇಲ್ಕಂಡ ಸಂಘದ ವಾರ್ಷಿಕ ಮಹಾಸಭೆ ಆ. ೨೫ ರಂದು ನಡೆಯಿತು. ಕೆ. ಎ. ಪಟವರ್ಧನ್ ಸ್ವಾಗತಿಸಿದರು. ಗೌರವಕಾರ್ಯದರ್ಶಿ ಟಿ.ಎಸ್. ಶೇಷಭಟ್ ವರದಿ ಮತ್ತು ಎರಡು ವರ್ಷಗಳ ಆಡಿಟ್ ವರದಿ ಮಂಡಿಸಿದರು. ಹೆಚ್ಚು ಅಕ್ಕಿ ಮತ್ತು ಸಕ್ಕರೆ ಕೊಡಿಸುವಂತೆ ಸಭೆ ಜಿಲ್ಲಾಧಿಕಾರಿ ತ್ತು ತಹಸೀಲ್ದಾರರನ್ನು ಒತ್ತಾಯಿಸಿತು. ೨ ವರ್ಷಗಳ ಲಾಭ ೬,೮೦೦ ರೂ. ಗಳನ್ನು ಬೈಲಾ ಪ್ರಕಾರ ಹಂಚಲಾಯ್ತು. ಡಿವಿಡೆಂಡ್ ಹಣವನ್ನು ಕಟ್ಟಡದ ನಿಧಿಗೆ ಜಮಾ ಮಾಡಬಹುದೆಂದು ತೀರ್ಮಾನಿಸಲಾಯ್ತು.

ನೂತನ ಸಾಲಿಗೆ ಈ ಕೆಳಕಂಡವರು ನಿರ್ದೇಶಕರಾಗಿ ಸರ್ವಾನುಮತದಿಂದ ಚುನಾಯಿತರಾದರು: ಎಂ.ಎಸ್. ಲಕ್ಷ್ಮೀನಾರಾಯಣ, ಕೆ. ಎಸ್. ಸುಬ್ರಮಣ್ಯ, ಕೆ. ಎಂ. ರಾಮಚಂದ್ರ ಅಡಿಗ, ವಿ. ಎಂ. ಜೋಂಗ್ರೆ (ಉಪಾಧ್ಯಾಯರುಗಳು), ಶೇಖರ್ (ಪುರಸಭೆ) ಮತ್ತು ಸಿದ್ದೇಗೌಡ (ಎಚ್. ಎ. ಎಸ್.)

ಸಾಲಿನ ನಿರ್ದೇಶಕ ಚುನಾವಣೆ ೨೮–೮–೮೩ ರಂದು ನಡೆದು, ಈ ಕೆಳಕಂಡವರು ಅವಿರೋಧ ಆಯ್ಕೆಯಾದರು:

ಜಯರಾಮ ಜೋಯಿಸ್, ಹೆಚ್. ಡಿ. ಶ್ರೀನಿವಾಸ್, ಹೆಚ್. ಆರ್. ಅನಂತಮೂರ್ತಿ, ಹೆಚ್. ಸುಬ್ರಮಣ್ಯ, ತಮ್ಮಯ್ಯ ಗೌಡ, ಹೆಚ್. ವಿ. ನಾಗರಾಜ್, ಬಿ. ಕೆ. ಶ್ರೀನಿವಾಸಯ್ಯ, ಸಿ. ವಿ. ಸುರೇಶ್ ನಾಯ್ಕ್, ಮತ್ತು ಮಲ್ಲಪ್ಪಗೌಡ.

## ಮೈಸೂರು ಬ್ಯಾಂಕ್ ಉತ್ತಮೇಶ್ವರ ಶಾಖೆ

ಉತ್ತಮೇಶ್ವರ: ಸ್ಟೇಟ್ ಬ್ಯಾಂಕ್ ಆಫ್ ಮೈಸೂರು–ಇದರ ಜೇವಿನ ಕೊಡಿಗೆ ಗ್ರಾಮಾಂತರ ಶಾಖೆಯನ್ನು ಇಲ್ಲಿ ಆ. ೨೬ ರಂದು ಕರಿದಾಯ ಉಪವಿಭಾಗಾಧಿಕಾರಿ ಕೆ. ನರಸಿಂಹಯ್ಯ ಉದ್ಘಾಟಿಸಿದರು. ಜೋಗೆಲ್ ಮ್ಯಾನೇಜರ್ ಸಿ.ಆರ್. ಕಲ್ಯಾಣ ರಾಮನ್ ಅಧ್ಯಕ್ಷತೆ ವಹಿಸಿದ್ದರು. ಬ್ಯಾಂಕಿನ ಪ್ರಾದೇಶಿಕ ಮ್ಯಾನೇಜರ್ ಎಸ್. ಮುರಳೀಧರ್, ಬಿ. ಜಿ. ಚಿದಂಬರ್, ತಹಸೀಲ್ದಾರ್ ಹೆಚ್. ಎಂ. ನಾಗಪ್ಪ, ಪಂ. ಅಧ್ಯಕ್ಷ ಸಿ. ಚಿನ್ನಯ್ಯ, ಕೊಪ್ಪ ಶಾಖೆ ಮ್ಯಾನೇಜರ್ ಆಚಾರ್ ಮುಖ್ಯ ಅತಿಥಿಗಳಾಗಿದ್ದರು. ಶಾಖಾ ಮ್ಯಾನೇಜರ್ ಗಣಪತಿ ವಂದಿಸಿದರು.

ಇದು ಮೈಸೂರು ಬ್ಯಾಂಕಿನ ೪೨೨ನೆಯ ಶಾಖೆಯಾಗಿದ್ದು, ಜಿಲ್ಲೆಯಲ್ಲಿ ಅದರ ೧೪ನೇ ಶಾಖೆಯಾಗಿದೆ. ರಾಜ್ಯದಲ್ಲಿ ೩೦೦ಕ್ಕೂ ಹೆಚ್ಚು ಶಾಖೆಗಳನ್ನು ಹೊಂದಿರುವ ಮೈಸೂರು ಬ್ಯಾಂಕಿನ ಠೇವಣಿ ೪೫೦ ಕೋಟಿ ರೂ. ಗಳಾಗಿದ್ದು, ಸುಮಾರು ೩೫೦ ಕೋಟಿ ರೂ. ಸಾಲ ಹಂಚಿದೆ. ಜಿಲ್ಲೆಯ ತನ್ನ ಶಾಖೆಗಳಲ್ಲಿ ೧೧ ಕೋಟಿ ರೂ. ಠೇವಣಿ ಹಾಗೂ ೮ ಕೋಟಿ ರೂ. ಸಾಲ ವಿತರಣೆ ಹೊಂದಿದೆ.

## ತಹಸೀಲ್ದಾರರ ಕ್ರಮಕ್ಕೆ ವಿರೋಧ

(೧ನೇ ಪುಟದಿಂದ)

ಈ ಸಂದರ್ಭದಲ್ಲಿ ಅವರು, ಹಂಗಾಮಿ ಸಾಗುವಳಿ ಚೀಟಿ ಪಡೆದು, ಕಟ್ಟಬೇಕಾದ ಹಣವನ್ನೆಲ್ಲ ಕಟ್ಟಿ ಸುಮಾರು ೧ ಎಕರೆ ಜಾಗದಲ್ಲಿ ತೆಂಗು–ಹಣ್ಣಿನ ಗಿಡಗಳನ್ನು ಬೆಳೆಸಿಕೊಂಡಿರುವ ಮೋಹನ್‌ರಾವ್ ಎಂಬವರಿಗೆ (ಅವರು ಅಲ್ಲಿನ ಸಾರ್ವಜನಿಕರ ಜೊತೆ ಸ್ವಲ್ಪ ಮುಂದೆ ನಿಂತು ಓಡಾಡುತ್ತಿದ್ದಾರೆ) — "ಆ ೧ ಗುಂಟೆ ಜಾಗವೇ ಏಕೆ? ನಿಮ್ಮ ಜಾಗ ಹೇಗೂ ನಿಮಗೆ ಖಾಯಂ ಆಗಿಲ್ಲ. ಅದನ್ನೇ ನಾನು ಸ್ವಾಧೀನಪಡಿಸಿ ಗಿಡಗಳನ್ನು ಕೀಳಿಸಿ, ಆಟದ ಮೈದಾನಕ್ಕೆ ಮೀಸಲಿಡಬಹುದಲ್ಲ?" ಎಂದು ಪರೋಕ್ಷವಾಗಿ ಬೆದರಿಕೆ ಹಾಕುವ ರೀತಿ ಈ ಪತ್ರಕರ್ತನ ಎದುರೇ ಹೇಳಿದ್ದು ಮಾತ್ರ ಅವರ ಘನತೆಗೆ ತಕ್ಕುದಾಗಿರಲಿಲ್ಲ; ಮಾತ್ರವಲ್ಲ, ಅದೊಂದು ತೀರ ಕೀಳು ದರ್ಜೆಯ ತಂತ್ರ ಎಂಬುದನ್ನು ವಿಷಾದದಿಂದ ಇಲ್ಲಿ ನಮೂದಿಸಬೇಕಾಗಿದೆ.

ಯಾರ ಸ್ವಾರ್ಥಕ್ಕೂ ಅಲ್ಲದೆ, ಒಂದು ಬಹಳ ಮಾನವೀಯ ಕಾರಣಕ್ಕಾಗಿ ಒಂದು ಚಿಕ್ಕ ಜಾಗ ಮೀಸಲಿಡಲು ಸಾರ್ವಜನಿಕರು ಜಾತಿ–ಕೋಮುಗಳೆನ್ನದೇ ಒಕ್ಕೊರಲಿನಿಂದ ಕೇಳುತ್ತಿರುವಾಗ, ಎಲ್ಲ ಗೊತ್ತಿದ್ದೂ ಅವರು ತೆಗೆದುಕೊಂಡಿರುವ ಈ ಕ್ರಮ ಅನಗತ್ಯವಾಗಿ ವೈಷಮ್ಯ, ಅಶಾಂತಿ ಮತ್ತು ಗಲಾಟೆಗಳಿಗೆ ಶಾಶ್ವತವಾಗಿ ದಾರಿ ಮಾಡಿಕೊಟ್ಟೀತು ಎಂಬ ಆತಂಕವನ್ನೂ ಅಧಿಕಾರಿಗಳ ಅವಗಾಹನೆಗಾಗಿ ಇಲ್ಲಿ ದಾಖಲಿಸಬೇಕಾಗಿದೆ.

ಈ ಮಧ್ಯೆ, ತಹಸೀಲ್ದಾರರಿಗೆ ವರ್ಗವಾಗಿದೆ ಎಂಬ ಸುದ್ದಿ ಬಂದಿದ್ದು, ಎಲ್ಲ ಭ್ರಷ್ಟ ಅಧಿಕಾರಿಗಳೂ ಮಾಡುವಂತೆ ಇವರೂ ಸಹ ತಾವು ವರ್ಗವಾಗಿ ಹೋಗುವಾಗ ಇಂಥ ವಿವಾದಾಸ್ಪದವಾದ ದರ್ಖಾಸ್ತನ್ನು ಮಂಜೂರು ಮಾಡಿ ಹೋಗುತ್ತಿದ್ದಾರೆಂದು ಜನ ಜನಿತವಾಗಿದೆ.

## ಸಹ। ಸಂಘಕ್ಕೆ ಆಯ್ಕೆ

ಕೆಸವೆ: ಇಲ್ಲಿನ ಕೆಲಕುಳಿ ಸೇವಾ ಸಹಕಾರ ಸಂಘದ ವಾರ್ಷಿಕ ಮಹಾ ಸಭೆ ಸಂಘದ ಅಧ್ಯಕ್ಷ ಕೆ. ಎಸ್. ಶಾಂತಾರಾಂ ಅಧ್ಯಕ್ಷತೆಯಲ್ಲಿ ಆ. ೨೪ ರಂದು ನಡೆದು ನೂತನ ಸಾಲಿಗೆ ಈ ಕೆಳಕಂಡವರು ನಿರ್ದೇಶಕರಾಗಿ ಆಯ್ಕೆಯಾದರು: ಕೆ. ಎಸ್. ಶಾಂತಾರಾಂ, ಸೋಮಯ್ಯ ಗೌಡ, ಪುಟ್ಟಪ್ಪ ಗೌಡ ಎಸ್. ಉಮೇಶ್, ಹೆಚ್. ವಿ. ಚಕ್ರಪಾಣಿ, ಕೃಷ್ಣಪ್ಪ, ಕೆ.ಜಿ. ಚಂದ್ರಶೇಖರ್, ಕೆ.ಎಸ್ ಸುಬ್ರಾವ್ ಮತ್ತು ಹೆಚ್. ಎಸ್. ಕಳಸಪ್ಪ.

### ಹಾಲ್ಮುತ್ತೂರು

ಇಲ್ಲಿನ ಸೇವಾ ಸ॥ ಸಂಘದ ೮೩–೮೪ನೇ



ಸಂಪಾದಕ, ಮುದ್ರಕ ಮತ್ತು ಪ್ರಕಾಶಕ:
ಸಿರಿಮನೆ ನಾಗರಾಜ್.
ಅಚ್ಚು: ದೀವಟಿಗೆ ಅಚ್ಚುಕೂಟ, ಕೊಪ್ಪ